# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **514**<br>(ಒಳಾಡಳಿತ ಇಲಾಖೆಯಿಂದ ವರ್ಗಾವಣೆಗೊಂಡಿರುವ) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸಿ.ಎಂ.ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ವಿಷಯ | : | ಐ.ಎಂ.ಎ ಪ್ರಕರಣಗಳ ಬಗ್ಗೆ. |
| ಉತ್ತರಿಸುವ ದಿನಾಂಕ | : | **16/12/2021** |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು. |

*****

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಐ.ಎಂ.ಎ., ಮತ್ತು ಅದರ ಅಂಗಸಂಸ್ಥೆಗಳ ವಂಚನೆ ಪ್ರಕರಣಗಳಲ್ಲಿ ಭಾಗಿಯಾಗಿರುವ ಆರೋಪಿತರ ಹೆಚ್ಚುವರಿ ಸ್ಥಿರ ಮತ್ತು ಚರಾಸ್ತಿಗಳನ್ನು ಸರ್ಕಾರವು ಮುಟ್ಟುಗೋಲು ಹಾಕಿಕೊಳ್ಳಲಾಗಿದೆಯೇ; (ಹೌದಾದಲ್ಲಿ ವಿವರ ಒದಗಿಸುವುದು) | ಐ.ಎಂ.ಎ ಮತ್ತು ಅದರ ಅಂಗ ಸಂಸ್ಥೆಗಳ ವಂಚನೆ ಪ್ರಕರಣಗಳಲ್ಲಿ ಭಾಗಿಯಾಗಿರುವ ಆರೋಪಿತರ ಹೆಚ್ಚುವರಿ ಸ್ಥಿರ ಮತ್ತು ಚರಾಸ್ತಿಗಳನ್ನು ಸರ್ಕಾರವು ಕೆ.ಪಿ.ಐ.ಡಿ. ಕಾಯ್ದೆ 2004ರ ಕಲಂ 3(2) ರಡಿ ದಿನಾಂಕ; 06-08-2019 ರಿಂದ ಈ ತಹಲ್‌ವರೆಗೆ ಒಟ್ಟು 17 ಮಧ್ಯಂತರ ಮುಟ್ಟುಗೋಲು ಅಧಿಸೂಚನೆಗಳನ್ನು ಹೊರಡಿಸಿದ್ದು, ಜುಮ್ಲಾ 345 ಚರಾಸ್ತಿಗಳು ಮತ್ತು 54 ಸ್ಥಿರಾಸ್ತಿಗಳನ್ನು ಸರ್ಕಾರವು ಮಧ್ಯಂತರ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. (ಅನುಬಂಧ ಲಗತ್ತಿಸಿದೆ) |

| | | |
|---|---|---|
| ಆ) | ಐ.ಎಂ.ಎ., ಮತ್ತು ಅದರ ಅಂಗಸಂಸ್ಥೆಗಳ ವಂಚನೆ ಪ್ರಕರಣದಲ್ಲಿ ಕೆ.ಪಿ.ಐ.ಡಿ ಕಾಯ್ದೆ, ಕಲಂ 7(2) ರಡಿ ಹೂಡಕೆದಾರರಿಗೆ ಹಣ ಹಿಂದಿರುಗಿಸಲು ಕ್ರಮ ಕೈಗೊಳ್ಳಲಾಗಿದೆ ಯೇ; (ಹೌದಾದಲ್ಲಿ ವಿವರ ಒದಗಿಸುವುದು) | ಐ.ಎಂ.ಎ ಮತ್ತು ಅದರ ಅಂಗ ಸಂಸ್ಥೆಗಳ ವಂಚನೆ ಪ್ರಕರಣದಲ್ಲಿ ಕೆಪಿಐಡಿ ಕಾಯ್ದೆ 2004ರ ಕಲಂ 7(2)ರಡಿ ಹೂಡಿಕೆದಾರರಿಗೆ ಹಣ ಹಿಂದಿರುಗಿಸಲು ಕ್ರಮ ಕೈಗೊಳ್ಳಲಾಗಿದೆ.<br><br>ದಿನಾಂಕ:-25.11.2020 ರಂದು ಠೇವಣಿದಾರರಿಗೆ ಹಣ ಹಿಂದಿರುಗಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದ್ದು, ಈ ತಹಲ್ ವರೆಗೂ 67067 ಅರ್ಜಿಗಳು ಸ್ವೀಕೃತವಾಗಿರುತ್ತದೆ.ಈ ಅರ್ಜಿಗಳನ್ನು ಸಿ.ಎಂ.ಎಸ್. (Claims Management Software) ಮೂಲಕ ಪಡೆದು ಪರಿಶೀಲಿಸಲಾಗಿರುತ್ತದೆ. ಇವುಗಳಲ್ಲಿ 63097 ಅರ್ಜಿದಾರರ ಗುರುತು, ಬ್ಯಾಂಕ್ ಖಾತೆ ವಿವರಗಳು, ಠೇವಣಿ ದಾಖಲಾತಿಗಳನ್ನು ಪರಿಶೀಲಿಸಿ ಮೌಲ್ಯೀಕರಣ ಮಾಡಲಾಗಿರುತ್ತದೆ. ಇವುಗಳಲ್ಲಿ 715 ಇ-ಅಟೆಸ್ಟೇಷನ್, 1455 ಹೆಚ್ಚುವರಿ ದೃಢೀಕರಣ ಹಾಗೂ 1800 ಜನರಿಗೆ ಬ್ಯಾಂಕ್ ಖಾತೆಯ ವಿವರಗಳನ್ನು ಮೌಲ್ಯೀಕರಿಸಲು ಬಾಕಿ ಇರುತ್ತದೆ. (ಬ್ಯಾಂಕ್‌ಗಳ ವಿಲೀನವಾದ ಕಾರಣ) ಶೇಕಡಾ 94ರಷ್ಟುಅರ್ಜಿಗಳನ್ನು ಮೌಲ್ಯೀಕರಿಸಿ (ಅರ್ಜಿದಾರರ ವಿವರಗಳಾದ ಗುರುತು, ಬ್ಯಾಂಕ್ ಖಾತೆ ವಿವರಗಳು, ಠೇವಣಿ ದಾಖಲಾತಿ) ಬಾಕಿ ಇರುವ ಠೇವಣಿದಾರರಿಗೆ ಠೇವಣಿ ಪಾವತಿಯ ಹಂತದಲ್ಲಿರುತ್ತದೆ.<br><br>ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಇತ್ಯರ್ಥಗೊಂಡಿರುವ ಪ್ರಕರಣಗಳಲ್ಲಿ ಒಳಗೊಂಡಿರುವ ಸ್ಥಿರ ಮತ್ತು ಚರಾಸ್ತಿಗಳನ್ನು ಹರಾಜು ಪ್ರಕ್ರಿಯೆಗೆ ಒಳಪಡಿಸಿ ವಸೂಲಾದ ಮೊತ್ತವನ್ನು ಠೇವಣಿದಾರರಿಗೆ ಹಿಂದಿರುಗಿಸಲಾಗಿರುವ ವಿವರವನ್ನು ಈ ಕೆಳಕಾಣಿಸಿದಂತೆ ಒದಗಿಸಲಾಗಿದೆ. |

| ಸರ್ಕಾರದಿಂದ ಮಧ್ಯಂತರ ಮುಟ್ಟುಗೋಲು ಹಾಕಿಕೊಳ್ಳಲು ಕಲಂ 3(2) ರಡಿ ಹೊರಡಿಸಲಾದ ಅಧಿಸೂಚನೆಗಳ ಸಂಖ್ಯೆ | ಈ ಅಧಿಸೂಚನೆಗಳಲ್ಲಿ ಒಳಗೊಂಡ ಸ್ಥಿರಾಸ್ತಿಗಳ ಸಂಖ್ಯೆ | ಈ ಅಧಿಸೂಚನೆಗಳಲ್ಲಿ ಒಳಗೊಂಡ ಚರಾಸ್ತಿಗಳ ಸಂಖ್ಯೆ | ಈ ಆಸ್ತಿಗಳನ್ನು ಕಲಂ 5(2)ರಡಿ ಸ್ಥಿರೀಕರಣಕ್ಕಾಗಿ ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ದಾಖಲಿಸಿದ ಪ್ರಕರಣಗಳ ಸಂಖ್ಯೆ | ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಇತ್ಯರ್ಥವಾದ ಪ್ರಕರಣಗಳ ಸಂಖ್ಯೆ | ಬಾಕಿ ಇರುವ ಪ್ರಕರಣಗಳ ಸಂಖ್ಯೆ | ಇತ್ಯರ್ಥವಾದ ಪ್ರಕರಣಗಳಲ್ಲಿ ಒಳಗೊಂಡಿರುವ ಆಸ್ತಿಗಳನ್ನು ಹರಾಜು ಮಾಡಿ ವಸೂಲಾದ ಮೊತ್ತ | ಮಾನ್ಯ ನ್ಯಾಯಾಲಯದ ಆದೇಶದ ರೀತ್ಯಾ ವಸೂಲಾದ ಮೊತ್ತವನ್ನು ಪಾವತಿಸಿದ ಠೇವಣಿದಾರರ ಸಂಖ್ಯೆ |
|---|---|---|---|---|---|---|---|
| 17 | 54 | 345 | 88 | 43 | 45 | 5,58,41,566 | 3,473 |

**** ಸ್ಥಿರಾಸ್ತಿಗಳನ್ನೊಳಗೊಂಡ ಪ್ರಕರಣಗಳು ಇತ್ಯರ್ಥಕ್ಕೆ ಬಾಕಿ ಇರುತ್ತದೆ.**

| | | |
|---|---|---|
| ಇ) | ಐ.ಎಂ.ಎ., ಮತ್ತು ಅದರ ಅಂಗಸಂಸ್ಥೆಗಳ ವಂಚನೆ ಪ್ರಕರಣವು ಪ್ರಸ್ತುತ ಯಾವ ಹಂತದಲ್ಲಿದೆ? (ವಿವರಿಸುವುದು) | ಐ.ಎಂ.ಎ ಮತ್ತು ಅದರ ಅಂಗ ಸಂಸ್ಥೆಗಳ ವಂಚನೆ ಪ್ರಕರಣಗಳಲ್ಲಿ ಕೆ.ಪಿ.ಐ.ಡಿ.ಎಫ್.ಇ ಕಾಯ್ದೆಯಡಿ ಮುಟ್ಟುಗೋಲು ಹಾಕಿಕೊಂಡಿರುವ ಆಸ್ತಿಗಳನ್ನು ಸ್ಥಿರೀಕರಿಸುವ ಸಂಬಂಧ ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ನಿಗದಿತ ಅವಧಿಯೊಳಗೆ ಒಟ್ಟು 88 ಪ್ರಕರಣಗಳನ್ನು ದಾಖಲಿಸಿದ್ದು, ಈ ಪೈಕಿ ತಹಲ್‌ವರೆಗೆ ಒಟ್ಟು 43 ಪ್ರಕರಣಗಳು ಇತ್ಯರ್ಥಗೊಂಡಿದ್ದು, 45 ಪ್ರಕರಣಗಳು ಇತ್ಯರ್ಥಕ್ಕೆ ಬಾಕಿ ಇರುತ್ತವೆ. |

(ಆರ್. ಅಶೋಕ)
ಕಂದಾಯ ಸಚಿವರು



# ಅನುಬಂಧ

**ಐ.ಎಂ.ಎ., ಮತ್ತು ಅದರ ಅಂಗ ಸಂಸ್ಥೆಗಳ ವಂಚನೆ ಪ್ರಕರಣದಲ್ಲಿ, ಕೆ.ಪಿ.ಐ.ಡಿ. ಕಾಯ್ದೆ 2004ರ ಕಲಂ 3(2) ರಡಿ ಸರ್ಕಾರದಲ್ಲಿ ಚರಾಸ್ತಿ ಹಾಗೂ ಸ್ಥಿರಾಸ್ತಿಗಳನ್ನು ಮಧ್ಯಂತರ ಮುಟ್ಟುಗೋಲು ಹಾಕಿಕೊಂಡು ಹೊರಡಿಸಲಾಗಿರುವ ಅಧಿಸೂಚನೆಗಳಲ್ಲಿರುವ ಸ್ವತ್ತುಗಳ ವಿವರ.**

| ಕ್ರ. ಸಂ. | ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ | ವಿವರ | ಚರಾಸ್ತಿ | ಸ್ಥಿರಾಸ್ತಿ |
|---|---|---|---|---|
| | | | ಸಂಖ್ಯೆ | |
| 1 | ಆರ್.ಡಿ. 20ಜಿ.ಆರ್.ಸಿ. 2017 (ಪಿ2) ಬೆಂಗಳೂರುದಿನಾಂಕ: 06.08.2019 | ಚಿನ್ನದ ಆಭರಣಗಳು, ಬ್ಯಾಂಕ್ ಖಾತೆಗಳು ಮತ್ತು ವಾಹನಗಳು | 73 | 26 |
| 2 | ಆರ್.ಡಿ. 20 ಜಿ.ಆರ್.ಸಿ 2017 (ಪಿ2) ದಿನಾಂಕ; 25-09-2019 | ಸ್ವತ್ತುಗಳಲ್ಲಿನ ನಗದು ಹಣ | 18 | 17 |
| | | ಡಿ.ಡಿ.ಗಳು | 9 | - |
| | | ವಾಹನಗಳು | 5 | - |
| | | ಬ್ಯಾಂಕ್ ಖಾತೆಗಳು | 43 | - |
| | | ಸ್ವತ್ತಿನನಗದುಹಣ | 1 | - |
| | | ಸ್ವತ್ತಿನಲ್ಲಿನಚಿನ್ನ | 1 | - |
| | | ಸ್ವತ್ತಿನಲ್ಲಿನಚಿನ್ನಾಭರಣ/ ಗಟ್ಟಿ | 5 | - |
| 3 | ಆರ್.ಡಿ. 20 ಜಿ.ಆರ್.ಸಿ. 2017 (ಪಿ2) ದಿನಾಂಕ; 5.12.2019 | ವಾಹನ | 1 | - |
| 4 | ಆರ್.ಡಿ. 20 ಜಿ.ಆರ್.ಸಿ. 2017 (ಪಿ4) ದಿನಾಂಕ; 02.03.2020 | ವಾಹನ | 4 | - |
| 5 | ಆರ್.ಡಿ 20 ಜಿ.ಆರ್.ಸಿ. 2017 (ಪಿ2) ದಿನಾಂಕ; 30.05.2020 | ವಾಹನ<br>ಪೀಠೋಪಕರಣಗಳು | 3<br>14 | - |
| 6 | ಆರ್.ಡಿ. 28 ಜಿ.ಆರ್.ಸಿ. 2020 ದಿನಾಂಕ; 04.08.2020 | ಬಾಡಿಗೆಸ್ವತ್ತಿನಲ್ಲಿನಕಛೇರಿಚರಾಸ್ತಿಗಳು | 30 | - |
| 7 | ಆರ್.ಡಿ. 20 ಜಿ.ಆರ್.ಸಿ. 2017(ಪಿ2) ದಿನಾಂಕ; 04.09.2020 | ವಾಹನ | 4 | - |
| 8 | ಆರ್.ಡಿ. 20 ಜಿ.ಆರ್.ಸಿ. 2017 (ಪಿ2) ದಿನಾಂಕ: 19.11.2020 | ಸ್ವತ್ತಿನ ಕಛೇರಿ ಚರಾಸ್ತಿಗಳು | 1 | - |
| 9 | ಆರ್.ಡಿ. 20 ಜಿ.ಆರ್.ಸಿ. 2017 (ಪಿ2) ದಿನಾಂಕ: 19.11.2020 | ಸ್ವತ್ತಿನ ಕಛೇರಿ ಚರಾಸ್ತಿಗಳು | 2 | - |
| 10 | ಆರ್.ಡಿ. 57 ಜಿ.ಆರ್.ಸಿ. 2020 ದಿನಾಂಕ; 03.02.2021 | | - | 4 |
| 11 | ಆರ್.ಡಿ 24 ಜಿ.ಆರ್.ಸಿ. 2021 ದಿನಾಂಕ; 19.02.2021 | ಚಿನ್ನಾಭರಣಗಳು | 1 | - |
| 12 | ಆರ್.ಡಿ. 34 ಜಿ.ಆರ್.ಸಿ. 2021 ದಿನಾಂಕ; 17.04.2021 | ಬೆಳ್ಳಿಆಭರಣ/ವಸ್ತುಗಳು | 1 | - |
| 13 | ಆರ್.ಡಿ. 18 ಜಿ.ಆರ್.ಸಿ. 2020 ದಿನಾಂಕ; 17.04.2021 | ಪೆಂಟಾಡ್ ಶೇರ್ಸ್ | 1 | - |
| 14 | ಆರ್.ಡಿ. 46 ಜಿ.ಆರ್.ಸಿ. 2020 ದಿನಾಂಕ; 06.07.2021 | ಬ್ಯಾಂಕ್ ಖಾತೆಗಳು | 6 | 3 |
| | | ಶೇರ್ಸ್/ಡಿಬೆಂಚರ್ಸ್ | 5 | 2 |
| | | ಚಿನ್ನಾಭರಣಗಳು | 2 | 2 |

| ಕ್ರ.ಸಂ. | ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ | ವಿವರ | ಚರಾಸ್ತಿ | ಸ್ಥಿರಾಸ್ತಿ |
|---|---|---|---|---|
| | | | ಸಂಖ್ಯೆ | |
| 15 | ಆರ್.ಡಿ. 55 ಜಿ.ಆರ್.ಸಿ. 2020 ದಿನಾಂಕ; 06.07.2021 | ಬ್ಯಾಂಕ್ ಖಾತೆಗಳು | 100 | - |
| 16 | ಆರ್.ಡಿ. 47 ಜಿ.ಆರ್.ಸಿ. 2021 ದಿನಾಂಕ; 09.08.2021 | ಖುರಾನ್ ಪುಸ್ತಕಗಳಎರಡುಚರಸ್ವತ್ತುಗಳು | 2 | - |
| 17 | ಆರ್.ಡಿ. 59 ಜಿ.ಆರ್.ಸಿ. 2021 ದಿನಾಂಕ; 19.11.2021 | ವಾಹನಗಳು | 13 | - |
| | | **ಒಟ್ಟು** | **345** | **54** |